ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಮಂಗಳವಾರ, ದಿನಾಂಕ: 29ನೇ ಸೆಪ್ಟಂಬರ್, 2020

ಮನೆಕಟ್ಟಲು ಬಿ.ಎಂ.ಐ.ಸಿ. ಅನುಮತಿ ಕುರಿತು

ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) :-

969(1122) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಮಂಡ್ಯ ಜಿಲ್ಲೆಯ ಮದ್ದೂರು ಪುರ ಸಭೆಯನ್ನು ಯಾವಾಗ ಸ್ಥಾಪಿಸಲಾಯಿತು; ಇದರ ಕ್ಷೇತ್ರ ಎಷ್ಟು; ಹಾಲಿ ಇರುವ ಜನಸಂಖ್ಯೆ ಎಷ್ಟು; ವಾರ್ಡುಗಳು ಯಾವುವು; (ವಿವರವಾದ ಮಾಹಿತಿ ನೀಡುವುದು)

(ಆ) ಸದರಿ ಪುರಸಭೆಯು ಬಿ.ಎಂ.ಐ.ಸಿ (ನೈಸ್ ಸಂಸ್ಥೆ) ವ್ಯಾಪ್ತಿಗೆ ಬರುತ್ತದೆಯೇ; (ವಿವರವಾದ ಮಾಹಿತಿ ನೀಡುವುದು)

(ಇ) ಮದ್ದೂರು ಪುರಸಭಾ ವ್ಯಾಪ್ತಿಯಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಹಾಗೂ ಮನೆ ನಿರ್ಮಿಸಲು ಬಿ.ಎಂ.ಐ.ಸಿ ಯಿಂದ ಎನ್.ಓ.ಸಿ ಕೇಳುತ್ತಿರುವುದು ನಿಜವೇ; ಹಾಗಿದ್ದಲ್ಲಿ ಇದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಈ) ಸದರಿ ಬಿ.ಎಂ.ಟಿ.ಸಿ. ರಸ್ತೆಯು ನಗರ ಸಂಸ್ಥೆಗಳಾದ ಚನ್ನಪಟ್ಟಣ ಹಾಗೂ ಇತರೆ ಸಂಸ್ಥೆಗಳ ಮೂಲಕ ಹಾದು ಹೋಗಿದ್ದರೂ ಕೇವಲ ಮದ್ದೂರು ಪುರಸಭೆ ವ್ಯಾಪ್ತಿಯಲ್ಲಿ ಮಾತ್ರ ಎನ್.ಓ.ಸಿ. ಕೇಳುತ್ತಿರುವುದು ಅನ್ಯಾಯವಲ್ಲವೇ;

(ಉ) ಇದರಿಂದ ಕಳೆದ ಹತ್ತಾರು ವರ್ಷಗಳಿಂದ ಮದ್ದೂರು ಪುರಸಭಾ ವ್ಯಾಪ್ತಿಯಲ್ಲಿ ಮನೆ ಕಟ್ಟಲಾಗದೇ ಸಾರ್ವಜನಿಕರು ಸಂಕಷ್ಟ ಪರಿಸ್ಥಿತಿಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರವು ಯಾವ ಕಾಲಮಿತಿಯೊಳಗೆ ಇದಕ್ಕೆ ಪರಿಹಾರವನ್ನು ನೀಡಲಿದೆ?